# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1686
ಸದಸ್ಯರ ಹೆಸರು : ಶ್ರೀ ಕೆ ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 23/03/2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಒತ್ತುವರಿಯಾಗಿರುವ ಒಟ್ಟು ಅರಣ್ಯ ಪ್ರದೇಶದ ಅಂದಾಜು ಸರ್ಕಾರಕ್ಕಿದೆಯೇ, ಹಾಗಿದ್ದಲ್ಲಿ, ಪ್ರದೇಶವಾರು ಪ್ರತ್ಯೇಕ ಮಾಹಿತಿ ಒದಗಿಸುವುದು; | ರಾಜ್ಯದಲ್ಲಿ ಒಟ್ಟು 2,04,229.762 ಎಕರೆ ಅರಣ್ಯ ಭೂಮಿಯನ್ನು ಒತ್ತುವರಿ ಮಾಡಿಕೊಳ್ಳಲಾಗಿದೆ. ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ಲಗತ್ತಿಸಿ ಸಲ್ಲಿಸಿದೆ. |
| ಆ) | ಒತ್ತುವರಿಯಾಗಿರುವ ಅರಣ್ಯ ಪ್ರದೇಶವನ್ನು ತೆರವುಗೊಳಿಸಿ ಮತ್ತೆ ಇಲಾಖೆಯ ವಶಕ್ಕೆ ತೆಗೆದುಕೊಳ್ಳುವಲ್ಲಿ ಸರ್ಕಾರ ಯಾವ ಕ್ರಮಗಳನ್ನು ಅನುಸರಿಸುತ್ತದೆ, (ಸಂಪೂರ್ಣ ಮಾಹಿತಿ ಒದಗಿಸುವುದು) | ಡಿಸೆಂಬರ್ 2019 ರ ಅಂತ್ಯಕ್ಕೆ 3.00 ಎಕರೆಗಿಂತ ಮೇಲ್ಪಟ್ಟಂತೆ 3,322 ಪ್ರಕರಣಗಳಲ್ಲಿ 19279.85 ಎಕರೆ ಅರಣ್ಯ ಭೂಮಿಯನ್ನು ಒತ್ತುವರಿದಾರರಿಂದ ಅರಣ್ಯ ಇಲಾಖಾ ವಶಕ್ಕೆ ಹಿಂಪಡೆಯಲಾಗಿದೆ.<br>ಆದರೆ, ಸರ್ಕಾರದ ಸುತ್ತೋಲೆ ಸಂಖ್ಯೆ: ಅಪಜೀ.45. ಎಫ್‌ಜಿಎಲ್.2015 ದಿನಾಂಕ 13.03.2015 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಅಪಜೀ.45.ಎಫ್‌ಜಿಎಲ್. 2015, ದಿನಾಂಕ 21.09.2015 ರಲ್ಲಿ ನೀಡಿದ ಸೂಚನೆಯ ಅನುಸಾರ ದಿನಾಂಕ 27.04.1978 ರ ನಂತರ 3.00 ಎಕರೆವರೆಗೆ (ಅರಣ್ಯ ಒತ್ತುವರಿ ಜಮೀನು ಮತ್ತು ಒತ್ತುವರಿದಾರರ ಪಟ್ಟಾ ಜಮೀನು ಸೇರಿ) ಅರಣ್ಯ ಒತ್ತುವರಿ ಮಾಡಿರುವಂತಹ ಒತ್ತುವರಿದಾರರಿಗೆ ಪುನರ್ವಸತಿ ಮತ್ತು ಪುನರ್‌ವ್ಯವಸ್ಥೆ ಪ್ಯಾಕೇಜ್ ಕಲ್ಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>ಬಾಕಿ ಉಳಿದ ಒತ್ತುವರಿದಾರರ ವಿರುದ್ಧ ಅರಣ್ಯ ಮೊಕದ್ದಮೆಯನ್ನು ದಾಖಲಿಸಿ, ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಭೂ ಕಬಳಿಕೆ ವಿಶೇಷ ನ್ಯಾಯಾಲಯದಲ್ಲಿ ದಾವೆ ಹೂಡುತ್ತಿದ್ದು ಹಾಗೂ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 64(ಎ) ಪ್ರಕಾರ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ವೈಯಕ್ತಿಕ ಹಿತಾಸಕ್ತಿಯಿಂದಾಗಿ ಅರಣ್ಯ ಪ್ರದೇಶವನ್ನು ಒತ್ತುವರಿ ಮಾಡಿ ಸರ್ಕಾರಕ್ಕೆ ವಂಚಿಸಿರುವ ವ್ಯಕ್ತಿಗಳ/ಸಂಸ್ಥೆಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ; ಹಾಗಿದ್ದಲ್ಲಿ ಅಂತಹ ವ್ಯಕ್ತಿಗಳ ವಿರುದ್ಧ ಕೈಗೊಂಡಿರುವ ಕ್ರಮಗಳ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು. | |
| ಈ) | ಒತ್ತುವರಿ ತೆರವು ನಂತರದಲ್ಲಿ ವಶಪಡಿಸಿ ಕೊಳ್ಳಲಾದ ಅರಣ್ಯ ಪ್ರದೇಶವನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಮುಂದಿನ ಕ್ರಮಗಳೇನು? (ಮಾಹಿತಿ ಒದಗಿಸುವುದು) | ಒತ್ತುವರಿಯನ್ನು ತೆರವುಗೊಳಿಸಿ ವಶಪಡಿಸಿಕೊಂಡ ನಂತರ ಅಂತಹ ಅರಣ್ಯ ಪ್ರದೇಶದಲ್ಲಿ ಸುತ್ತಲು ಬೇಲಿ ನಿರ್ಮಾಣ/ ಕಂದಕ ನಿರ್ಮಾಣ ಮಾಡಿ ವಿವಿಧ ಜಾತಿಯ ನೆಡುತೋಪು ಬೆಳೆಸಲಾಗುತ್ತಿದೆ. |

ಸಂಖ್ಯೆ: ಅಪಜೀ 27 ಎಫ್‌ಜಿಎಲ್ 2020

21/03/2020
(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಅನುಬಂಧ

ಒತ್ತುವರಿಯಾದ ಅರಣ್ಯ ಪ್ರದೇಶದ ಜಿಲ್ಲಾವಾರು ವಿವರ

| ಕ್ರ ಸಂ | ಜಿಲ್ಲೆ | ಒತ್ತುವರಿಯಾದ ಅರಣ್ಯ ಪ್ರದೇಶದ ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|
| 1 | ಬೆಳಗಾವಿ | 3764.77 |
| 2 | ಬಾಗಲಕೋಟೆ | 737.34 |
| 3 | ಶಿವಮೊಗ್ಗ | 81502.44 |
| 4 | ಉತ್ತರ ಕನ್ನಡ | 28344.212 |
| 5 | ಬಳ್ಳಾರಿ | 84.89 |
| 6 | ಚಿತ್ರದುರ್ಗ | 76.16 |
| 7 | ದಾವಣಗೆರೆ | 403.99 |
| 8 | ಕೊಪ್ಪಳ | 250.11 |
| 9 | ದಕ್ಷಿಣ ಕನ್ನಡ | 4057.55 |
| 10 | ಉಡುಪಿ | 1823.67 |
| 11 | ಚಿಕ್ಕಮಗಳೂರು | 30641.11 |
| 12 | ಮೈಸೂರು | 2518.50 |
| 13 | ಮಂಡ್ಯ | 2551.75 |
| 14 | ಚಾಮರಾಜನಗರ | 4505.09 |
| 15 | ಹಾಸನ | 1124.48 |
| 16 | ತುಮಕೂರು | 1568.37 |
| 17 | ಧಾರವಾಡ | 314.50 |
| 18 | ಗದಗ | 5172.28 |
| 19 | ಹಾವೇರಿ | 3071.17 |
| 20 | ಬೀದರ್ | 3274.00 |
| 21 | ಕಲ್ಬುರ್ಗಿ | 1419.12 |
| 22 | ಯಾದಗಿರಿ | 2282.29 |
| 23 | ರಾಯಚೂರು | 2609.12 |
| 24 | ಬೆಂಗಳೂರು ನಗರ | 2043.44 |
| 25 | ಬೆಂಗಳೂರು ಗ್ರಾಮಾಂತರ | 864.20 |
| 26 | ಕೋಲಾರ | 6605.28 |
| 27 | ಚಿಕ್ಕಬಳ್ಳಾಪುರ | 1722.64 |
| 28 | ರಾಮನಗರ | 3738.47 |
| 29 | ಕೊಡಗು | 7158.82 |
| 30 | ವಿಜಯಪುರ | 0 |
|  | ಒಟ್ಟು | 204229.762 |

ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
(ಭೂ ದಾಖಲೆ)